# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 196
ಸದಸ್ಯರ ಹೆಸರು : ಶ್ರೀ ಪಿ.ಆರ್.ರಮೇಶ (ನಾಮ ನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 13-09-2021.
ಉತ್ತರಿಸುವ ಸಚಿವರು : ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| 1. | ಎಸ್. ಎಲ್. ಭೈರಪ್ಪರವರ ಪರ್ವ ನಾಟಕವನ್ನು ರಾಜ್ಯದಲ್ಲಿ ಸಾರ್ವಜನಿಕ ಪ್ರದರ್ಶನ ಸಲುವಾಗಿ ಸರ್ಕಾರದಿಂದ 2021-22ರ ಸಾಲಿನಲ್ಲಿ ಎಷ್ಟು ಮೊತ್ತದ ಹಣವನ್ನು ಮೀಸಲಿಡಲಾಗಿತ್ತು; ಮತ್ತು ಇಲ್ಲಿಯವರೆಗೆ ಎಷ್ಟು ಹಣವನ್ನು ಬಿಡುಗಡೆ ಮಾಡಲಾಗಿದೆ;<br>(ವಿವರ ನೀಡುವುದು) | ಡಾ.ಎಸ್.ಎಲ್. ಭೈರಪ್ಪನವರ ಪರ್ವ ಕಾದಂಬರಿ ಆಧಾರಿತ ಪರ್ವ ನಾಟಕವನ್ನು ರಾಜ್ಯದಾದ್ಯಂತ ಪ್ರದರ್ಶನ ಏರ್ಪಡಿಸಲು ಮೈಸೂರು ರಂಗಾಯಣಕ್ಕೆ ಕರ್ನಾಟಕ ಸರ್ಕಾರದ 2021-22ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳು ರೂ.1.00 ಕೋಟಿ ಕಾಯ್ದಿರಿಸಿರುವುದಾಗಿ ಘೋಷಿಸಿರುತ್ತಾರೆ. |
| 2. | ರಾಜ್ಯ/ದೇಶದಲ್ಲಿ ಇಲ್ಲಿಯವರೆಗೆ ಎಷ್ಟು ಕಡೆ ನಾಟಕವನ್ನು ಪ್ರದರ್ಶಿಸಲಾಗಿದೆ; ಮತ್ತು ಸದರಿ ಪ್ರದರ್ಶನಗಳಿಗೆ ಎಷ್ಟು ಮೊತ್ತದ ಹಣವನ್ನು ವೆಚ್ಚ ಮಾಡಲಾಗಿದೆ;<br>(ಸಂಪೂರ್ಣ ವಿವರ ನೀಡುವುದು) | ಪರ್ವ ನಾಟಕದ ರಂಗಪ್ರಯೋಗವನ್ನು 2021 ಮಾರ್ಚ್ 12ರಿಂದ ಪ್ರದರ್ಶನ ಆರಂಭಿಸಿ ಮೈಸೂರಿನಲ್ಲಿ ಮಾತ್ರ ಈವರೆಗೆ 12 ಪ್ರದರ್ಶನಗಳನ್ನು ನಡೆಸಲಾಗಿದೆ.<br>ಈ ನಾಟಕದ ಸಿದ್ಧತೆಗಾಗಿ 2020-21ನೇ ಸಾಲಿನಲ್ಲಿ ಬಿಡುಗಡೆ ಮಾಡಿದ್ದ ರೂ.50.00 ಲಕ್ಷಗಳ ಅನುದಾನ ಪೂರ್ಣ ವೆಚ್ಚವಾಗಿದೆ. ಕೋವಿಡ್-19ರ ಕಾರಣ ಏಪ್ರಿಲ್ 4ರ ನಂತರ ಸ್ಥಗಿತಗೊಂಡಿದ್ದ ಈ ನಾಟಕದ ಪ್ರದರ್ಶನ ಇದೀಗ ಸೆಪ್ಟೆಂಬರ್ 04 ರಿಂದ ಆರಂಭವಾಗಿದ್ದು, ಪ್ರತಿ ಶನಿವಾರ ಮತ್ತು ಭಾನುವಾರದ ಪ್ರದರ್ಶನಗಳು ಅಕ್ಟೋಬರ್-2021ರ ಅಂತ್ಯದವರೆಗೆ ಮುಂದುವರಿಯಲಿವೆ.<br>ವೆಚ್ಚದ ವಿವರವನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| 3. | ಪರ್ವ ಪುಸ್ತಕದಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಸಾರ್ವಜನಿಕ ನಾಟಕ ಪ್ರದರ್ಶನದಲ್ಲಿ ಅಳವಡಿಸಿಕೊಳ್ಳಲಾಗಿದೆಯೇ; ಇಲ್ಲವಾದಲ್ಲಿ, ಯಾವ ಅಂಶಗಳನ್ನು ಕೈಬಿಡಲಾಗಿದೆ; ವಿವರ ನೀಡುವುದು | ಪರ್ವ ಕಾದಂಬರಿಯ ಒಟ್ಟು ಆಶಯಕ್ಕೆ ಧಕ್ಕೆ ಬಾರದಂತೆ ಕಾದಂಬರಿಯ ಎಲ್ಲ ಅಂಶಗಳನ್ನು ಕಾದಂಬರಿಕಾರರೊಂದಿಗೆ ಚರ್ಚಿಸಿ, ಕಾದಂಬರಿ ನಿಷ್ಠವಾಗಿ, ನಾಟಕೀಯ ಅಂಶಗಳಿಗೆ ಒತ್ತು ನೀಡಿ ಸುಮಾರು ಎಂಟೂವರೆ ತಾಸುಗಳ ನಾಟಕವಾಗಿ ರಂಗಪಠ್ಯ ಸಿದ್ಧಪಡಿಸಿ ನಾಟಕ ಪ್ರದರ್ಶನ ಮಾಡಲಾಗುತ್ತಿದೆ |

2...

| | | |
|---|---|---|
| 4. | ಸದರಿ ನಾಟಕ ಪ್ರದರ್ಶನದಿಂದ ಕರ್ನಾಟಕ ರಾಜ್ಯದಲ್ಲಿ ಸಮಾಜದ ಮೇಲೆ ಯಾವುದಾದರೂ ಪರಿಣಾಮ ಬೀರಿದೆಯೇ? ಈ ಕುರಿತು ಅಧ್ಯಯನ ನಡೆಸಲಾಗಿದೆಯೇ? (ವಿವರ ನೀಡುವುದು) | ಪರ್ವ ನಾಟಕ ನೋಡಿದ ಎಲ್ಲಾ ಪ್ರೇಕ್ಷಕರು ಮೆಚ್ಚುಗೆ ವ್ಯಕ್ತಪಡಿಸಿದ್ದಲ್ಲದೆ, ರಾಜ್ಯಮಟ್ಟದ, ರಾಷ್ಟ್ರಮಟ್ಟದ ಎಲ್ಲಾ ಪತ್ರಿಕೆಗಳು, ವಾಹಿನಿಗಳು ಮೆಚ್ಚುಗೆಯ ವರದಿಗಳನ್ನು, ಲೇಖನಗಳನ್ನು, ವಿಮರ್ಶೆಗಳನ್ನು ಪ್ರಕಟಿಸಿರುವುದರಿಂದ ನಾಟಕ ಒಟ್ಟಾರೆ ಸಮಾಜದ ಮೇಲೆ ಒಳ್ಳೆಯ ಪರಿಣಾಮ ಬೀರಿದೆ ಎಂದು ಭಾವಿಸಲಾಗಿದೆ.<br>ಯಾವುದೇ ನಾಟಕದ ಪರಿಣಾಮವನ್ನು ಕುರಿತು ಅಧ್ಯಯನ ನಡೆಸುವ ಪರಿಪಾಠ ಇರುವುದಿಲ್ಲ. |

ಸಂಖ್ಯೆ: ಕಸಂವಾ 48 ಕವಿಸ 2021

(ವಿ.ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

ಅನುಬಂಧ

# ಅನುಬಂಧ-1

## 'ಪರ್ವ' ನಾಟಕ ಸಿದ್ಧತೆ ಮತ್ತು ಪ್ರದರ್ಶನಗಳ ಈವರೆಗಿನ ವೆಚ್ಚದ ವಿವರ

| ಕ್ರ.ಸಂ | ವಿವರ | ವೆಚ್ಚ |
|---|---|---|
| 1 | ಪರ್ವ ನಾಟಕವನ್ನು ನಿರ್ದೇಶಿಸಿದ ರಾಷ್ಟ್ರಮಟ್ಟದ ನಾಟಕ ನಿರ್ದೇಶಕರಾದ ಶ್ರೀ ಪ್ರಕಾಶ್ ಬೆಳವಾಡಿ ಅವರ ಸಂಭಾವನೆ – ರೂ.1,00,000/- | 100000.00 |
| 2 | ಪರ್ವ ಬೃಹತ್ ರಂಗಪ್ರಯೋಗಕ್ಕೆ ಆಯ್ಕೆ ಮಾಡಿಕೊಂಡ ಹೆಚ್ಚುವರಿ ಕಲಾವಿದರಿಗೆ ಈವರೆಗೆ ಪಾವತಿಸಿದ ಸಂಭಾವನೆ | 2520000.00 |
| 3 | ಪರ್ವ ನಾಟಕ ರಂಗಸಜ್ಜಿಕೆ ನಿರ್ಮಾಣಕ್ಕೆ ಸಾಮಗ್ರಿಗಳ ಖರೀದಿ, ಹಾಗೂ ನಿರ್ಮಾಣ ಮಾಡಿದ ಕಲಾವಿದರ, ತಂತ್ರಜ್ಞರ ಸಂಭಾವನೆ ವೆಚ್ಚ (ಪ್ಲೈವುಡ್, ಮೊಳೆ, ಬಣ್ಣದ ಸಾಮಗ್ರಿ) | 432436.00 |
| 4 | ಪರ್ವ ನಾಟಕದ ಆಭರಣಗಳು, ಇದಕ್ಕೆ ಸಂಬಂಧಿಸಿದ ಪರಿಕರ ಖರೀದಿ ಹಾಗೂ ವಿನ್ಯಾಸಕರ ಸಂಭಾವನೆ, ಪ್ರಯಾಣ ವೆಚ್ಚ, ಸಾಗಣೆ ವೆಚ್ಚ | 114042.00 |
| 5 | ಪರ್ವ ನಾಟಕದ ಎಲ್ಲಾ ಪಾತ್ರಗಳಿಗೆ ವಸ್ತ್ರಗಳ ಖರೀದಿ ಮತ್ತು ಸಿದ್ಧತೆ | 263250.00 |
| 6 | ಅಂತರರಾಷ್ಟ್ರೀಯ ಮಟ್ಟದ ವಸ್ತ್ರ ವಿನ್ಯಾಸಕರಾದ ಪ್ರಸಾದ್ ಬಿದ್ದಪ್ಪ ಅವರ ಸಂಭಾವನೆ | 95000.00 |
| 7 | ಪ್ರಚಾರ ಸಾಮಗ್ರಿಗಳ ವಿನ್ಯಾಸಕರ ಸಂಭಾವನೆ ಮತ್ತು ಪ್ರಯಾಣ ವೆಚ್ಚ | 51000.00 |
| 8 | ನಾಟಕಗಳ ಪಾತ್ರಗಳಿಗೆ ಮುಖವಾಡ, ಪರಿಕರಗಳ ತಯಾರಿಕೆಗೆ ಸಾಮಗ್ರಿ ಖರೀದಿ ಹಾಗೂ ನಿರ್ಮಾಣ ಮಾಡಿದ ಕಲಾವಿದರ ಸಂಭಾವನೆ ವೆಚ್ಚ | 111600.00 |
| 9 | ಪರ್ವ ಕಾದಂಬರಿಯ ರಂಗರೂಪ ಕುರಿತ ವಿಚಾರ ಸಂಕಿರಣ ಸಂಘಟನಾ ವೆಚ್ಚ | 70685.00 |
| 10 | ಪ್ರಸಾದನ ಸಾಮಗ್ರಿ ಹಾಗೂ ಪ್ರಸಾದನ ವಿನ್ಯಾಸಕಾರರ ಸಂಭಾವನೆ | 58381.00 |
| 11 | ಪ್ರಚಾರ ಸಾಮಗ್ರಿಗಳ ಮುದ್ರಣ, ಸಾಗಣೆ ಮತ್ತು ಅಳವಡಿಕೆ ವೆಚ್ಚ (ಪೋಸ್ಟರ್, ಬ್ಯಾನರ್, ಟಿಕೆಟ್ ಹಾಗೂ ಬ್ರೋಷರ್) | 218087.00 |
| 12 | ಪರ್ವ ನಾಟಕದ ಮೆಗಾ ಶೋಗಳ ಸಂಚಾಲಕರ ಸಂಭಾವನೆ ಮತ್ತು ಪ್ರಯೋಗಗಳ ವೆಚ್ಚ | 35000.00 |
| 13 | ವೇದಿಕೆಗೆ ಅಗತ್ಯವಾದ ಹೆಚ್ಚುವರಿ ಲೈಟಿಂಗ್ ಸಾಮಗ್ರಿ ಖರೀದಿ, ರಿಪೇರಿ ಹಾಗೂ ಸಹಾಯಕರ ಸಂಭಾವನೆ | 25299.00 |
| 14 | ಮೆಗಾಶೋಗಳ ಹೆಚ್ಚುವರಿ ಧ್ವನಿ ಬೆಳಕಿನ ಬಾಡಿಗೆ ಮತ್ತು ಸಾಗಣೆ ವೆಚ್ಚ | 150000.00 |
| 15 | ಸಂಗೀತ ನಿರ್ದೇಶಕರು ಮತ್ತು ಸಂಗೀತ ಸಹಾಯಕರ ಸಂಭಾವನೆ | 250000.00 |
| 16 | 'ಮೇಕಿಂಗ್ ಆಫ್ ಪರ್ವ' ಸಾಕ್ಷ್ಯಚಿತ್ರ ಹಾಗೂ ಪರ್ವ ನಾಟಕದ ಸಂಪೂರ್ಣ ದಾಖಲೀಕರಣ ವೆಚ್ಚ | 155450.00 |
| 17 | ಪ್ರದರ್ಶನ ಸಂದರ್ಭ ಕಲಾವಿದರಿಗೆ, ತಂತ್ರಜ್ಞರಿಗೆ ಊಟ ಉಪಹಾರ ವೆಚ್ಚ | 115388.00 |
| 18 | ಪರ್ವ ಮಹಾಕಾದಂಬರಿಯನ್ನು ರಂಗಪಠ್ಯವನ್ನಾಗಿ ಸಿದ್ಧಪಡಿಸಿದ ನಾಟಕಕಾರರ ಸಂಭಾವನೆ | 50000.00 |
| 19 | ನಾಟಕ ನಿರ್ದೇಶಕರ ಊಟ-ವಸತಿ ವ್ಯವಸ್ಥೆ ಮತ್ತು ಪ್ರಯಾಣ ವೆಚ್ಚ | 25000.00 |
| 20 | ರಂಗಪಠ್ಯದ ಪ್ರತಿಗಳ ಸಿದ್ಧತೆ, ತಾಲೀಮಿನಲ್ಲಿ ಭಾಗವಹಿಸಿದ ತಂತ್ರಜ್ಞರ ಊಟ-ಉಪಹಾರ, ರಂಗಸಜ್ಜಿಕೆ, ನೇಪಥ್ಯ ಕಲಾವಿದರ ಊಟ-ಉಪಹಾರ ಹಾಗೂ ಪತ್ರಿಕಾಗೋಷ್ಠಿಗಳ ವೆಚ್ಚ | 70159.00 |
| | ಒಟ್ಟು ಮೊತ್ತ | 49,10,777.00 |

ಜಂಟಿ ನಿರ್ದೇಶಕರು
ರಂಗಾಯಣ, ಮೈಸೂರು